## ನನ್ನ ಕೈಗಳು, ಬಾಯಿ ಮತ್ತು ಮೂಗಿನ ರಂಧ್ರಗಳನ್ನು

# ತೆಂಗಿನೆಣ್ಣೆಯಿಂದ ತೊಳೆದರೆ

## ವೈರಾಣುವಿನ ಪೊರೆ ಕರಗಿ ಸೋಂಕು ನಿವಾರಣೆಯಾಗುತ್ತದೆಯೇ?

ಒಂದೇ ರೀತಿಯ ರಾಸಾಯನಿಕ ಗುಣಸ್ವಭಾವಗಳನ್ನು ಹೊಂದಿರುವ ವಸ್ತುಗಳು ಪರಸ್ಪರ ಕರಗುತ್ತವೆ ಎನ್ನುವಂತೆಯೇ, ಧ್ರುವೀಯ ಅಥವಾ ಪೂರಣಗೊಂಡ ವಸ್ತುವು ಇತರ ಧ್ರುವೀಯ ವಸ್ತುಗಳನ್ನು ಕರಗಿಸುತ್ತದೆ ಹಾಗೂ ಅಧ್ರುವೀಯ ವಸ್ತುಗಳು ಇತರ ಧ್ರುವೀಯವಲ್ಲದ ವಸ್ತುಗಳನ್ನು ಕರಗಿಸಬಲ್ಲವು. ಅಂದರೆ, ಕೊಬ್ಬಿನಂತಹ ವಸ್ತುವಿನಿಂದ ಮಾಡಲ್ಪಟ್ಟ ಧ್ರುವೀಯ ಮೇದಸ್ಸುಗಳು, ಕೊರೊನಾವೈರಸ್‌ನ ಅತ್ಯಂತ ಹೊರಗಿನ ಪದರವನ್ನು (ಎನ್ವೆಲಪ್ ಎಂದು ಕರೆಯಲಾಗುತ್ತದೆ) ಕರಗಿಸಬಲ್ಲವು. ಸಾಬೂನುಗಳು ಸಹ ಇದನ್ನು ಮಾಡಬಲ್ಲವು. ಅಂದರೆ, ಧ್ರುವೀಯ ಮೇದಸ್ಸುಗಳು ಮತ್ತು ಸಾಬೂನುಗಳು, ಕೊರೊನಾವೈರಸ್‌ನ ಕೋಶದ ಒಳಪೊರೆಗಳು ಮತ್ತು ಹೊದಿಕೆಯಂತೆ ಇರುವ ಧ್ರುವೀಯ ಫಾಸ್ಫೋಲಿಪಿಡ್ ಬೈಲೇಯರ್‌ಗಳನ್ನು ಕರಗಿಸುವ ಮತ್ತು ಒಡೆಯುವ ಕಲಿಲ ಕಣಗಳನ್ನು ಉಂಟು ಮಾಡುತ್ತವೆ. ಆದರೆ, ತೆಂಗಿನೆಣ್ಣೆಯು ಅಧ್ರುವೀಯ ಕೊಬ್ಬಿನಾಮ್ಲಗಳನ್ನು ಹೊಂದಿದ್ದು, ನೀರಿನ ಜೊತೆ ಬೆರೆಸಿದಾಗ ಗೋಳಕಣಗಳನ್ನು (ಕಲಿಲ ಕಣಗಳ ಬದಲಾಗಿ) ಉಂಟು ಮಾಡುತ್ತದೆ. ಅಯಾನೀಕರಿಸಿದ, ಪೂರಣಗೊಂಡ ಸ್ಥಿತಿಯಲ್ಲಿಯೂ, ತಮ್ಮ ರಾಸಾಯನಿಕ ರಚನೆಯ ಕಾರಣ, ಈ ಕೊಬ್ಬಿನಾಮ್ಲಗಳು ಪರಿಣಾಮಕಾರಿಯಾಗಿ ಕಲಿಲ ಕಣಗಳನ್ನು ಉಂಟು ಮಾಡುವುದಿಲ್ಲ. ತೆಂಗಿನೆಣ್ಣೆಯನ್ನು ಮೂಲವಾಗಿ ಬಳಸುವ ಸಾಬೂನುಗಳು ಹೇಗಿರುತ್ತವೆ? ಈ ಸಾಬೂನುಗಳಲ್ಲಿರುವ ತೈಲವನ್ನು ಸಾಬೂನಾಗಿ ಮಾರ್ಪಡಿಸಲಾಗಿರುತ್ತದೆ ಅಥವಾ ರಾಸಾಯನಿಕ ಪ್ರಕ್ರಿಯೆಯ ಮೂಲಕ ಬೇರೆಯೇ ರಾಸಾಯನಿಕ ರಚನೆಗೆ ಬದಲಾಯಿಸಲಾಗಿರುತ್ತದೆ. ಹೀಗಾಗಿ, ಕೈಗೆ ತೆಂಗಿನೆಣ್ಣೆಯನ್ನು ಹಚ್ಚುವುದರಿಂದ ಸಾರ್ಸ್-ಕೋವಿ-2 ಮೇಲೆ ಯಾವುದೇ ರೀತಿಯ ಪರಿಣಾಮ ಉಂಟಾಗುವುದಿಲ್ಲ. (ಬಾಕ್ಸ್ 1 ನೋಡಿ).

**ಬಾಕ್ಸ್ 1. ನಿಮಗಿದು ತಿಳಿದಿದೆಯೇ?**
ಕೈಯನ್ನು ಸಾಬೂನು ಮತ್ತು ನೀರು ಅಥವಾ ಆಲ್ಕೋಹಾಲ್ ಹೊಂದಿರುವ ಸ್ಯಾನಿಟೈಸರ್‌ಗಳಿಂದ ತೊಳೆಯಬೇಕೆಂದು ವಿಶ್ವ ಆರೋಗ್ಯ ಸಂಸ್ಥೆಯು (ಡಬ್ಲ್ಯೂ.ಎಚ್.ಒ) ಹೇಳುತ್ತದೆ. ಸಾರ್ಸ್-ಕೋವಿ-2ರ ಮೇಲ್ಪದರವನ್ನು ನಾಶಪಡಿಸಲು ಸಾಬೂನನ್ನು ಮಾತ್ರವೇ ಶಿಫಾರಸ್ಸು ಮಾಡಲಾಗಿದೆ. ಆಲ್ಕೋಹಾಲ್ ಹೊಂದಿರುವ ಸ್ಯಾನಿಟೈಸರ್‌ಗಳು, ಈ ಕೊಬ್ಬಿನ ಪದರದಲ್ಲಿ ಪ್ರೋಟೀನ್‌ಗಳನ್ನು ನಾಶಪಡಿಸುವ ಮೂಲಕ ಸಂಪೂರ್ಣವಾಗಿ ಬೇರೆಯೇ ರೀತಿಯಲ್ಲಿ ಕೆಲಸ ಮಾಡುತ್ತವೆ.

ಕೆಲವು ಕೊಬ್ಬುಗಳು (ತೆಂಗಿನೆಣ್ಣೆಯಲ್ಲಿ ಇರುವಂತಹ) ಪ್ರಯೋಗಾಲಯದ ಪರೀಕ್ಷೆಯಲ್ಲಿ ಬ್ಯಾಕ್ಟೀರಿಯಾದ ಕೆಲವು ಪ್ರಭೇದಗಳ ವಿರುದ್ಧ ಪ್ರತಿಸೂಕ್ಷ್ಮಜೀವೀಯ ಗುಣಲಕ್ಷಣಗಳನ್ನು ತೋರಿದರೂ, ಇವು ವೈರಸ್‌ಗಳನ್ನು ಬಾಧಿಸಬಲ್ಲವು ಎನ್ನುವುದಕ್ಕೆ ಯಾವುದೇ ಪುರಾವೆಗಳಿಲ್ಲ. ಅಧ್ಯಯನವೊಂದರ ಪ್ರಕಾರ, ಲಾರಿಕ್ ಆಮ್ಲದಿಂದ ಪಡೆದ ರಾಸಾಯನಿಕವೊಂದು, ಕೊರೊನಾವೈರಸ್ ಸೇರಿದಂತೆ ಅನೇಕ ವೈರಸ್‌ಗಳ ವಿರುದ್ಧ ಪರಿಣಾಮಕಾರಿಯಾಗಿದೆ ಎಂದು ತಿಳಿದುಬಂದಿದೆ. ಲಾರಿಕ್ ಆಮ್ಲವು ತೆಂಗಿನೆಣ್ಣೆಯ ಪ್ರಮುಖ ಘಟಕವೆನಿಸಿದರೂ (49%), ಈ ಎಣ್ಣೆಯಲ್ಲಿ ವೈರಸ್ ನಿವಾರಕ ವ್ಯುತ್ಪನ್ನವು ಕಂಡುಬಂದಿಲ್ಲ. ಹೀಗಾಗಿ, ತೆಂಗಿನೆಣ್ಣೆಯು ಸಾರ್ಸ್-ಕೋವಿ-2 ಅನ್ನು ನಿಷ್ಕ್ರಿಯಗೊಳಿಸುತ್ತದೆ ಎಂದು ಹೇಳಲು ಯಾವುದೇ ಆಧಾರಗಳಿಲ್ಲ.

**ಟಿಪ್ಪಣಿ:**

1. ಇಂಡಿಯನ್ ಸೈಂಟಿಸ್ಟ್ಸ್ ರೆಸ್ಪಾನ್ಸ್ ಟು ಕೋವಿಡ್–19 (ಐಎಸ್ಆರ್‌ಸಿ) ಜಾಲತಾಣದಲ್ಲಿ ಈ ಪ್ರತಿಕ್ರಿಯೆಗಳನ್ನು ಮೊದಲು ಪ್ರಕಟಿಸಲಾಗಿತ್ತು.
2. ಈ ಲೇಖನದ ಶೀರ್ಷಿಕೆಯ ಹಿನ್ನೆಲೆಯಲ್ಲಿ ಬಳಸಿರುವ ಚಿತ್ರದ ಮೂಲ: https://www.pikrepo.com/fnnic/coconut.

**ಇಂಡಿಯನ್ ಸೈಂಟಿಸ್ಟ್ಸ್ ರೆಸ್ಪಾನ್ಸ್ ಟು ಕೋವಿಡ್–19 (ಐಎಸ್ಆರ್‌ಸಿ)** ಎಂಬುದು ಸುಮಾರು ಐನೂರು ಭಾರತೀಯ ವಿಜ್ಞಾನಿಗಳು, ಎಂಜಿನಿಯರ್‌ಗಳು, ತಂತ್ರಜ್ಞರು, ವೈದ್ಯರು, ಸಾರ್ವಜನಿಕ ಆರೋಗ್ಯ ತಜ್ಞರು, ವಿಜ್ಞಾನ ಸಂವಹನಕಾರರು, ಪತ್ರಕರ್ತರು ಮತ್ತು ವಿದ್ಯಾರ್ಥಿಗಳು ಸೇರಿ ಪ್ರಪಂಚದಾದ್ಯಂತ ಹರಡಿರುವ ಕೋವಿಡ್–19ಗೆ ಪ್ರತಿಸ್ಪಂದಿಸಿ ಸ್ವಯಿಚ್ಛೆಯಿಂದ ರಚಿಸಿಕೊಂಡ ಗುಂಪು. ಈ ಗುಂಪಿನ ಮಿಂಚಂಚೆ indscicov@gmail.com.

ಅನುವಾದ: **ಮೆಲ್ವಿನ್ ಮೆಂಡೋನ್ಸಾ** । ಪರಿಶೀಲನೆ: **ದಿನೇಶ್ ಮಡಗಾಂವ್‌ಕರ್**